# ಹರ್ಬಟ್ "ಹ್ಯಾರಿ" ಸ್ಟ್ಯಾಕ್ ಸಲ್ಲಿವನ್ (1892-1949)

## ಇಂದಿರಾ ಜೈಪ್ರಕಾಶ್



***

ಇಪ್ಪತ್ತನೆಯ ಶತಮಾನದಲ್ಲಿ ಬಹಳಷ್ಟು ಮಂದಿ ಮನೋವಿಶ್ಲೇಷಕರು ಯುರೋಪಿಯನ್ ಮೂಲದವರಾಗಿದ್ದರು. ಆದರೆ ಸಲ್ಲಿವಾನ್ ಅಮೆರಿಕೆಯಲ್ಲಿ ಮನೋವಿಜ್ಞಾನ ಬೆಳೆಸಿದವರಲ್ಲಿ ಪ್ರಮುಖನು. 'ಆಧುನಿಕ ಮನೋಚಿಕಿತ್ಸೆಯ ಪಿತಾಮಹ' ಎಂದು ಕರೆಯಲ್ಪಡುವ ಸಲ್ಲಿವನ್ ಅಮೆರಿಕೆಯ ಪ್ರಸಿದ್ಧ ಮನೋವಿಜ್ಞಾನಿ. ಇವನ ಕುಟುಂಬ ಐರ್ಲೆಂಡ್ ನಿಂದ ವಲಸೆ ಬಂದು ಅಮೆರಿಕೆಯಲ್ಲಿ ನೆಲೆಸಿತ್ತು. 1892 ರಲ್ಲಿ ನ್ಯೂಯಾರ್ಕ್‌ನ ಬಳಿ ಇದ್ದ ನಾರ್ವಿಚ್ ಎಂಬ ಪುಟ್ಟ ಕೃಷಿಕ ಸಮುದಾಯದಲ್ಲಿ ಇವನು ಜನಿಸಿದ. ಕೃಷಿಕಾರ್ಮಿಕನಾಗಿದ್ದ ಇವನ ತಂದೆ ಟಿಮೊತಿ ಮತ್ತು ತಾಯಿ ಬಗ್ಗೆ ಹೆಚ್ಚು ತಿಳಿದಿಲ್ಲ. ಬಡತನ, ಏಕಾಂಗಿತನ ಬಾಲ್ಯದಿಂದಲೇ ಬಳುವಳಿಯಾಗಿದ್ದು ಜಮೀನಿನಲ್ಲಿದ್ದ ಪ್ರಾಣಿಗಳೇ ಬಾಲಕ ಹ್ಯಾರಿಯ ಸಂಗಾತಿಗಳಾಗಿದ್ದವು. ಪ್ರೊಟೆಸ್ಟಂಟರೇ ಹೆಚ್ಚಾಗಿದ್ದ ಪ್ರದೇಶದಲ್ಲಿ ಈ ಬಡ ಕ್ಯಾಥೊಲಿಕ್ ಬಾಲಕ ಕಷ್ಟಗಳ ನಡುವೆ ಶಾಲೆ ಮುಗಿಸಿದ. ಶಿಕಾಗೋನಲ್ಲಿ ವೈದ್ಯಕೀಯ ವಿದ್ಯಾಭ್ಯಾಸ ಮಾಡಿ ವಾಶಿಂಗಟನ್ ಡಿ.ಸಿ.ಯಲ್ಲಿ ಸೇಂಟ್ ಎಲಿಜಬೆತ್ ಆಸ್ಪತ್ರೆಯಲ್ಲಿ ಕೆಲಸಕ್ಕೆ ಸೇರಿದ.

ಈ ಆಸ್ಪತ್ರೆಯಲ್ಲಿ ಇವನಿಗೆ ಆಗ ಪ್ರಸಿದ್ಧನಾಗಿದ್ದ ವಿಲಿಯಂ ಅಲಾನ್ಸನ್ ವೈಟ್ ಎಂಬ ಮನೋವಿಜ್ಞಾನಿಯ ಪರಿಚಯವಾಯಿತು. ವೈಟ್ ಈತನಿಗೆ ಬಾಲ್ಟಿಮೋರ್‌ನಲ್ಲಿದ್ದ ಶಫರ್ಡ್ ಅಂಡ್ ಎನೊಕ್ ಪ್ರಾಟ್ ಆಸ್ಪತ್ರೆಯಲ್ಲಿ ಕೆಲಸ ಪಡೆಯಲು ಸಹಾಯ ಮಾಡಿದ. ಈ ಘಟನೆ ಇವನ ಜೀವನದ ದಿಕ್ಕನ್ನೇ ಬದಲಿಸಿತು ಇಲ್ಲಿ ಸಲ್ಲಿವನ್ ಇಚ್ಛಿತ್ತ (schizophrenia)ದಿಂದ ಬಳಲುವ ರೋಗಿಗಳನ್ನು ಗುಣಪಡಿಸುವಲ್ಲಿ ಅಸಾಧಾರಣ ಜಯ ಸಾಧಿಸಿ 'ಮಾಂತ್ರಿಕ ಚಿಕಿತ್ಸಕ' ಎಂದು ಕರೆಸಿಕೊಂಡ. 1931ರಲ್ಲಿ ನ್ಯೂಯಾರ್ಕ್‌ಗೆ ಹೋಗಿ ಡಾ. ಕ್ಲಾರಾ ಥಾಮ್ಸನ್ ಬಳಿ ಮನೋವಿಶ್ಲೇಷಣೆಯಲ್ಲಿ ಭಾಗವಹಿಸಿದ. ಫ್ರಾಯ್ಡನ ಸಿದ್ಧಾಂತಗಳನ್ನು ಒಪ್ಪದ ಇನ್ನಿತರರ ಜೊತೆಗೂಡಿ 1936ರಲ್ಲಿ ವಿಲಿಯಂ ವೈಟ್ ಫೌಂಡೇಶನ್ ಮತ್ತು ವಾಶಿಂಗಟನ್ ಸ್ಕೂಲ್ ಆಫ್ ಸೈಕಿಯಾಟ್ರಿ ಸ್ಥಾಪಿಸಲು ನೆರವಾದ. ಇವನ ಚಿಂತನೆಗಳನ್ನು "ಅಂತರವ್ಯಕ್ತೀಯ ಮನೋವಿಜ್ಞಾನ' ಎಂದು ಕರೆಯಲಾಗಿದೆ.

ಸಾಮಾಜಿಕ ಮನೋವೈದ್ಯಕೀಯ (Social Psychiatry), ಮನೋವೈದ್ಯಕೀಯ ಸಂದರ್ಶನ ಮತ್ತು ಅಂತರವ್ಯಕ್ತೀಯ ಮನೋವಿಶ್ಲೇಷಣೆ (Interpersonal psychoanalysis) ಇವನ ಕೊಡುಗೆಗಳು. ವ್ಯಕ್ತಿತ್ವವನ್ನು ಒಬ್ಬನನ್ನು ಸುತ್ತುವರಿದಿರುವ ಅಂತರವ್ಯಕ್ತಿ ಸಂಬಂಧಗಳಿಂದ ಬೇರ್ಪಡಿಸಲಾಗುವುದಿಲ್ಲ. ಹೀಗಾಗಿ ಮನೋವೈದ್ಯಕೀಯ ಕೂಡಾ ಅಂತರವ್ಯಕ್ತೀಯ ಸಂಬಂಧಗಳ ಕ್ಷೇತ್ರವಾಗಿದೆ ಎಂದು ಮನೋವೈದ್ಯಕೀಯದ ದಿಕ್ಕನ್ನೇ ಬದಲಿಸಿದ. ಕ್ಲಾರಾ ಥಾಮ್ಸನ್, ಹಾರ್ನಿ, ಫ್ರಾಂ, ಒಟ್ಟೋ ವಿಲ್, ಎರಿಕ್‌ಸನ್ ಮತ್ತು ಫ್ರೈಡಾರ ಜೊತೆಗೂಡಿ ಆಗ ಪ್ರಬಲವಾಗಿದ್ದ ಫ್ರಾಯ್ಡನ ಸಿದ್ಧಾಂತಕ್ಕೆ ವಿರುದ್ಧವಾದ ವಿಚಾರಧಾರೆ ರೂಪಿಸಿದನು. ವ್ಯಕ್ತಿಯನ್ನು ಅರ್ಥಮಾಡಿಕೊಳ್ಳಲು ವ್ಯಕ್ತಿಯ ಸಂಬಂಧಗಳ ಜಾಲವನ್ನು ಅರಿಯಬೇಕು. ಮಾನಸಿಕ ಕಾಯಿಲೆಗಳಿಗೆ ಕೇವಲ ಆಂತರಿಕ ಕಾರಣಗಳಲ್ಲದೆ ಸಾಮಾಜಿಕ, ಸಾಂಸ್ಕೃತಿಕ ಪ್ರಭಾವಗಳನ್ನು ಗಮನಿಸಬೇಕು. ಇವನ ಈ ಅಭಿಪ್ರಾಯಗಳು ಮುಂದೆ 'ಸಾಮಾಜಿಕ ಮನೋವೈದ್ಯಕೀಯದ' ಬೆಳವಣಿಗೆಗೆ ಆಧಾರವಾಯಿತು. ಹಾರ್ನಿ ಮತ್ತು ಫ್ರಾಂ ರಂತೆ ಇವನನ್ನೂ 'ನವ ಫ್ರಾಯ್ಡ್ ಪಂಥೀಯ' ಎಂದು ಗುರುತಿಸಲಾಗುತ್ತದೆ.

ಮನೋವಿಜ್ಞಾನದಲ್ಲಿ 'ಮಹತ್ವ ಪೂರ್ಣ ಇತರರ' ಅಗತ್ಯ ಮತ್ತು ಸ್ವ-ವ್ಯವಸ್ಥೆ ಎಂಬ ಕಲ್ಪನೆಗಳನ್ನು ಬೆಳಕಿಗೆ ತಂದವನು ಸಲ್ಲಿವಾನ್. 'ಸ್ವ-ವ್ಯವಸ್ಥೆ' ಬಾಲ್ಯದಲ್ಲಿ ಹುಟ್ಟುವ ವ್ಯಕ್ತಿತದ ವಿಶೇಷಾಂಕಗಳ ಸಮೂಹವಾಗಿದ್ದು ಆತಂಕವನ್ನು ದೂರ ಮಾಡಿ ಆತ್ಮಗೌರವಕ್ಕೆ ಧಕ್ಕೆಯಿಂದ ಕಾಪಾಡಿಕೊಳ್ಳುವ ಪ್ರಕ್ರಿಯೆಗಳಿಂದ ವ್ಯವಸ್ಥಿತವಾಗುತ್ತದೆ. ವ್ಯಕ್ತಿತ್ವ ಒಂದು ಶಕ್ತಿಯ ಸ್ವ-ವ್ಯವಸ್ಥೆಯಾಗಿದ್ದು ಇದರಲ್ಲಿ ಅಗತ್ಯಗಳು, ಆತಂಕಗಳು ಎಂದು ಎರಡು ಪ್ರಕಾರಗಳಿರುತ್ತವೆ. ಅಗತ್ಯಗಳು ಜೈವಿಕ ಮಾತ್ರವಲ್ಲದೆ ಆಪ್ತತೆ, ಅಕ್ಕರೆ ಮುಂತಾದ ಮಾನವ ಸಂಬಂಧಗಳನ್ನೂ ಒಳಗೊಂಡಿರುತ್ತವೆ. ಆತಂಕ ವಿಚ್ಛಿದ್ರಕಾರಕವಾಗಿದ್ದು ಶೈಶವದಲ್ಲೇ ಮಕ್ಕಳು ತಮ್ಮ ಪಾಲಕರ ಭಾವನೆಗಳನ್ನು ಗ್ರಹಿಸಿ ಆತಂಕ ಬೆಳೆಸಿಕೊಳ್ಳುತ್ತಾರೆ. ತಮ್ಮ ಮತ್ತು ಇತರರ ಬಗ್ಗೆ ಮೂರ್ತಸ್ವರೂಪ (Personification)ಗಳನ್ನು ಬೆಳೆಸಿಕೊಂಡಿದ್ದು ಇವುಗಳಲ್ಲಿ ಮುಖ್ಯವಾದವು-'ಕಲ್ಯಾಣಕಾರಿ ಮತ್ತು ದುಷ್ಟ ಮಾತೆ'. ತಾಯಿ ಅಗತ್ಯಗಳನ್ನು ಪೂರ್ತಿಗೊಳಿಸದಿದ್ದಾಗ ಆಕೆಯನ್ನು ದುಷ್ಟೆಯೆಂದು, ಸಂತೃಪ್ತಗೊಳಿಸಿದಾಗ ಒಳ್ಳೆಯವಳೆಂದು ಮಗು ಭಾವಿಸುತ್ತದೆ. ಅನುಭವದಿಂದ ಮುಂದೆ ಇವೆರಡೂ ಕಲ್ಪನೆಗಳು ಒಂದಾಗಿ ನಿಜವಾದ ತಾಯಿಯ ಸ್ವರೂಪ ಗೋಚರವಾಗುತ್ತದೆ. ಅದೇ ರೀತಿ ತನ್ನ ಬಗ್ಗೆಯೂ ಮಗು- 'ಒಳ್ಳೆಯ, ಕೆಟ್ಟ ಎಂಬ ಎರಡಲ್ಲದೆ- 'ನಾನೇ ಅಲ್ಲ' ಎಂದು ತನ್ನನ್ನೇ ತಿರಸ್ಕರಿಸಿಕೊಳ್ಳುವ ಮೂರ್ತಸ್ವರೂಪ ಬೆಳೆಸಿಕೊಳ್ಳುತ್ತದೆ. ಮಾನವ ಸಂಬಂಧಗಳು ಅತ್ಯಗತ್ಯವಾಗಿದ್ದು ಏಕಾಂಗಿತನ ಅತ್ಯಂತ ಅಸಹನೀಯ ಮಾನವ ಅನುಭವವಾಗಿರುತ್ತದೆ. ಏಕಾಂಗಿತನ ತಪ್ಪಿಸಿಕೊಳ್ಳಲು ಮಕ್ಕಳು ಬೆಳೆಯುವಾಗ ಕಾಲ್ಪನಿಕ ಗೆಳೆಯರು, ಸಾಕುಪ್ರಾಣಿಗಳನ್ನೂ ಸೃಷ್ಟಿಮಾಡಿಕೊಳ್ಳುತ್ತಾರೆ.

ಮಕ್ಕಳ ಸಂಜ್ಞಾನಾತ್ಮಕ ಬೆಳವಣಿಗೆಯಲ್ಲಿ ಮೂರು ಹಂತಗಳು: 'ಮೂಲಮುಖಿ (Prototaxic)' ಎನ್ನುವ ಹಂತದಲ್ಲಿ ಮಗುವಿನ ಮಾನಸಿಕ ಜೀವನ ಮೊದಲು ಅಸ್ಪಷ್ಟವಾದ ಅನುಭವ ಮತ್ತು ಸಂವೇದಗಳಿಂದ ಕೂಡಿರುತ್ತದೆ. 'ಪರಾಮೂಲ (Parataxic)' ಹಂತದಲ್ಲಿ ಮಗು ನಿಧಾನವಾಗಿ ತನ್ನ ಸಂವೇದನೆಗಳನ್ನು ಅಸ್ಪಷ್ಟವಾಗಿ ವ್ಯಕ್ತಪಡಿಸುವ ಮಟ್ಟ ಮುಟ್ಟುತ್ತದೆ. 12 ರಿಂದ 18 ತಿಂಗಳ ಹೊತ್ತಿಗೆ 'ರಚನಾ ಮೂಲ (Syntaxic)' ಹಂತದಲ್ಲಿ ಮಗು ಸಂಬಂಧವಿರುವ ಪದಗಳನ್ನು ಜೋಡಿಸಿ ತನ್ನ ಆಲೋಚನೆಗಳನ್ನು ಸ್ಪಷ್ಟಪಡಿಸಲು ಸಮರ್ಥವಾಗುತ್ತದೆ. ರಕ್ಷಣಾ ತಂತ್ರಗಳ ಬಳಕೆಯಿಂದ ಆತಂಕ ಕಡಿಮೆಯಾಗುತ್ತದೆ. ಸ್ವ-ವ್ಯವಸ್ಥೆ ಸಂಘಟನಾ ಕಾರ್ಯದಿಂದ ಆತ್ಮಾಭಿಮಾನವನ್ನು ರಕ್ಷಿಸುತ್ತದೆ. ವಯಸ್ಕರಲ್ಲಿ ಪರಾಮೂಲ ರೂಪದ ಆಲೋಚನೆಗಳು ವಾಸ್ತವವನ್ನು ತಿರುಚಿ ಅಪಸಮಾಯೋಜನೆ ಉಂಟುಮಾಡುತ್ತವೆ.

ರಚನಾಮೂಲ ಸಂವಹನ ಪರಿಪಕ್ವವಾದ ಸಂವೇಗಾತ್ಮಕ ಅಂತರಕ್ರಿಯೆಗೆ ಅಗತ್ಯ. ಇದು ಇವನ ಸಂಜ್ಞಾನ ಸಿದ್ಧಾಂತದ ಸಾರ.

ಸಲ್ಲಿವಾನ್ ವ್ಯಕ್ತಿತ್ವ ವಿಕಾಸದಲ್ಲಿ ಏಳು ಹಂತಗಳನ್ನು ಗುರುತಿಸಿದ:

**1.** ಶೈಶವ: ಹುಟ್ಟಿನಿಂದ 18 ತಿಂಗಳವರೆಗೆ ಅಗತ್ಯಗಳ ತೃಪ್ತಿಯೇ ಪ್ರಮುಖ.

**2.** ಬಾಲ್ಯ: 18 ತಿಂಗಳಿನಿಂದ 6 ವರ್ಷ, ಅಗತ್ಯಗಳ ಪೂರೈಕೆಯನ್ನು ಮುಂದೂಡುವುದು, ತಾಯಿ ಪ್ರತ್ಯೇಕ ವ್ಯಕ್ತಿ ಎಂಬ ಅರಿವು, ಬೇರೆಮಕ್ಕಳ ಸಹವಾಸದ ಇಚ್ಛೆ.

**3.**ಕಿಶೋರಾವಸ್ಥೆ: 6 ರಿಂದ 9 ವರ್ಷ, ಬೇರೆ ಮಕ್ಕಳ ಜೊತೆ ಆತ್ಮೀಯ ಸಂಬಂಧ ಬೆಳೆಸಿಕೊಳ್ಳುವುದು, ಸಹಕಾರ, ಸ್ಪರ್ಧೆ ಮತ್ತು ರಾಜಿಮಾಡಿಕೊಳ್ಳುವುದನ್ನು ಕಲಿಯುವುದು.

**4.**ಹರೆಯ-ಪೂರ್ವ: 9-12 ವರ್ಷ, ತನ್ನದೇ ಲಿಂಗದ ಜೊತೆಗಾರನೊಡನೆ ಆತ್ಮೀಯತೆ ಬೆಳೆಸಿಕೊಳ್ಳುವುದು.

**5.**ಹದಿಹರೆಯ: 12 ರಿಂದ 14 ವರ್ಷದಲ್ಲಿ ಅನನ್ಯತೆಯ ಬೆಳವಣಿಗೆಯಾಗುತ್ತದೆ.

**6.**ಹದಿಹರೆಯೋತ್ತರ: 16-21 ಈ ಅವಸ್ಥೆಯಲ್ಲಿ 'ಮಹತ್ವಪೂರ್ಣ ಇತರರ' ಜೊತೆ ಸ್ಥಿರವಾದ ಸಂಬಂಧ ಗಟ್ಟಿಯಾಗುವುದಲ್ಲದೆ, ಪ್ರಪಂಚವನ್ನು ನೋಡಲು ಒಂದು ಸುಸಂಗತ ವಿನ್ಯಾಸವೂ ರಚನೆಯಾಗುತ್ತದೆ.

**7.**ಇಲ್ಲಿಂದ ವ್ಯಕ್ತಿ ಪ್ರಾಯಕ್ಕೆ ಕಾಲಿಡುತ್ತಾನೆ. ಹೀಗೆ ಕೇವಲ ಬಾಲ್ಯಕ್ಕೆ ಮಾತ್ರ ಪ್ರಾಧ್ಯಾನತೆ ನೀಡದೆ ವಿಕಾಸದಲ್ಲಿನ ಇತರ ಹಂತಗಳನ್ನು ಸಲ್ಲಿವಾನ್ ಚರ್ಚಿಸಿದ.

ಸಲ್ಲಿವಾನ್‌ನ ಪ್ರಕಾರ  ಮಾನಸಿಕ ತೊದರೆಗಳಿಗೆ ಮುಖ್ಯವಾಗಿ ಅಂತರವ್ಯಕ್ತೀಯ ಸಂಬಂಧಗಳೇ ಕಾರಣ. ಮಾನಸಿಕ ತೊಂದರೆ ಇರುವ ವ್ಯಕ್ತಿ ತನ್ನೊಡನೆ ಮತ್ತು ಇತರರ ಜೊತೆಯ ಸಂಬಂಧಗಳಲ್ಲಿ ಕಷ್ಟಗಳನ್ನು ಅನುಭವಿಸುತ್ತಾನೆ. ಮನೋರೋಗಿಗಳ ಪರಿಸ್ಥಿತಿ ವರ್ಣಿಸಲು ಇವನು 'ಜೀವನದ ಸಮಸ್ಯೆ'ಗಳು ಎಂಬ ಪದ ಬಳಸಿದ್ದು ಮುಂದೆ ಥಾಮಸ್ ಸ್ಜಾಜ್‌ನ 'ಮನೋವೈದ್ಯಕೀಯ-ವಿರೋಧಿ ಚಳುವಳಿಯಲ್ಲಿ' ಇದು ವಿಸ್ತರಿತಗೊಂಡಿತು. ಸಲ್ಲಿವನ್ ಸಾಮಾಜಿಕ ಮತ್ತು ವ್ಯಕ್ತಿಯ ಪ್ರಸ್ತುತ ಸಮಸ್ಯೆಗಳಿಗೆ ಹೆಚ್ಚು ಒತ್ತು ನೀಡಿದ. ಮಾನಸಿಕ ಸಮಸ್ಯೆಗಳಲ್ಲಿ ಏಕಾಂಗಿತನ ಹಾಗೂ 'ಮಹತ್ವಪೂರ್ಣ ಇತರರ' ಕೊರತೆ ಇರುವುದು ಸಮಾಜದ ಪ್ರಭಾವವನ್ನು ತೋರಿಸುತ್ತದೆ. ಮನೋಚಿಕಿತ್ಸೆಯಲ್ಲಿ ಚಿಕಿತ್ಸಕ ಒಬ್ಬ 'ಸಹಭಾಗಿ ವೀಕ್ಷಕ'ನಂತೆ ವ್ಯಕ್ತಿಗೆ ತನ್ನ ಸಂಬಂಧಗಳನ್ನು, ಸಾಮಾಜಿಕ ವ್ಯವಸ್ಥೆಯನ್ನು ಅರ್ಥಮಾಡಿಕೊಳ್ಳಲು ಮತ್ತು ಪ್ರಾಯದ ಹಂತದ ಆಲೋಚನಾ ವೈಖರಿ ಬೆಳೆಸಿಕೊಳ್ಳಲು ಸಹಾಯ ಮಾಡುತ್ತಾನೆ.

ಅಂದಿನ ದಶಕಗಳಲ್ಲಿ ಸಲಿಂಗಕಾಮ(homosexuality)ವನ್ನು ಅಪರಾಧ ಮತ್ತು ಮಾನಸಿಕ ರೋಗ ಎಂದು ಪರಿಗಣಿಸಲಾಗುತ್ತಿತ್ತು. ಸಲ್ಲಿವನ್ ಸಲಿಂಗಕಾಮಿಗಳ ಬಗ್ಗೆ ಇದ್ದ ತಾರತಮ್ಯ ಕಡಿಮೆಮಾಡಲು ಪೂರಕವಾದ ಅಧ್ಯಯನಗಳನ್ನು ಮಾಡಿದ್ದ. ವಿನ್‌ಫ್ರೆಡ್ ಒವರ್ಹೋಲ್ಸರ್ ಎಂಬ ಸಹೋದ್ಯೋಗಿಯೊಡನೆ ಅಮೆರಿಕೆಯ ಸೇನೆಗೆ ಸೇರಲು ಬಯಸುವವರ ಪರಿಶೀಲನೆಗೆ ನಿಯಮಾವಳಿ ರೂಪಿಸಿದ. ವ್ಯಕ್ತಿಯ ಲೈಂಗಿಕ ಒಲವಿಗೆ ಮನೋರೋಗದಲ್ಲಿ ಕನಿಷ್ಠ ಪಾತ್ರವಿರುವುದರಿಂದ  ಸಲಿಂಗಕಾಮಿಗಳನ್ನು ಒಪ್ಪಿಕೊಂಡು ಅವರಷ್ಟಕ್ಕೆ ಬಿಡುವುದು ಒಳ್ಳೆಯದು ಎಂದು ಶಿಫಾರಸು ಮಾಡಿದ್ದ. ಆದರೂ ಅವನ ಮಾತಿಗೆ ಬೆಲೆಕೊಡದೆ  ಸಲಿಂಗಕಾಮಿಗಳನ್ನು ಮಿಲಿಟರಿಯಲ್ಲಿ ಸೇರಿಸಕೂಡದು ಎಂದು ನಿರ್ಣಯಿಸಲಾಗಿತ್ತು. ಯುದ್ಧಕ್ಕೆ ಸಂಬಂಧಿಸಿದ ವಿಭಾಗಗಳಲ್ಲಿ ಸಲ್ಲಿವನ್ ಹಲವು ವರ್ಷ ಸೇವೆ ಸಲ್ಲಿಸಿದ್ದ.

ಅತ್ಯಂತ ಪ್ರಭಾವಶಾಲಿಯಾದ ಮನೋವೈದ್ಯ ಎಂದು ಕರೆಯಲ್ಪಟ್ಟಿದ್ದರೂ ಸಲ್ಲಿವಾನ್ ಜೀವನದ ಅನೇಕ ವಿಷಯಗಳು ರಹಸ್ಯಮಯವಾಗಿದ್ದು ಊಹಾಪೋಹಗಳಿಗೆ ದಾರಿಮಾಡಿಕೊಟ್ಟಿತ್ತು. ಅವನ ಬಾಲ್ಯ ಬಡತನ, ತಾರತಮ್ಯತೆ, ಕಾಯಿಲೆಗಳಿಂದ ಕೂಡಿತ್ತು. ಅವನ ಬಾಲ್ಯದಲ್ಲಿ ಗೆಳೆಯನಾಗಿದ್ದು ನಂತರ ದೂರವಾದ ಬಾಲ್ಲಿಂಗರ್ ಎಂಬುವವನ ಜೊತೆ ಅವನ ಸಂಬಂಧ ಪ್ರಶ್ನಾರ್ಥಕವಾಗಿತ್ತು. ಕ್ಲಾರಾ ಥಾಂಪ್ಸನ್ ಅವನಿಗೆ ಬಹಳ ಹತ್ತಿರವಾಗಿದ್ದು ಅವರಿಬ್ಬರೂ ಮದುವೆಯ ನಿಶ್ಚಿತಾರ್ಥ ಮಾಡಿಕೊಂಡು ಮೂರು ದಿನಗಳಲ್ಲೇ ಅದು ಮುರಿದುಬಿತ್ತು ಎಂಬ ವದಂತಿ ಇತ್ತು. ಅವನು ಅನೌಪಚಾರಿಕವಾಗಿ ಜೇಮ್ಸ್ ಇನ್‌ಸಕೋ ಎಂಬ 15 ವರ್ಷದವನನ್ನು 'ದತ್ತು' ತೆಗೆದುಕೊಂಡಿದ್ದು ಅವನಿಗೆ ಸಲ್ಲಿವಾನ್ ಎಂಬ ಕುಟುಂಬದ ಹೆಸರನ್ನೂ ನೀಡಿದ್ದ. ಅನೇಕರ ಪ್ರಕಾರ ಜೇಮ್ಸ್ ಇವನ ಜೊತೆಗಾರನಾಗಿದ್ದು ಅವನೊಡನೆ 22 ವರ್ಷ ಸಂಬಂಧವಿರಿಸಿಕೊಂಡಿದ್ದ ಎನ್ನಲಾಗುತ್ತದೆ. ಆ ಕಾಲದಲ್ಲಿ ಇಂತಹ ವಿಷಯಗಳ ಬಗ್ಗೆ ಅಸಹನೆ ಇದ್ದುದ್ದರಿಂದ ಈ ಸಂಬಂಧವನ್ನು ಗುಪ್ತವಾಗಿರಿಸಿದ್ದ ಎಂದು ಚರಿತ್ರಕಾರರು ಹೇಳುತ್ತಾರೆ. ಮನೋರೋಗದ ಚಿಕಿತ್ಸೆಯಲ್ಲಿ ಕ್ರಾಂತಿ ಉಂಟುಮಾಡಿದ್ದ ಸಲ್ಲಿವಾನ್ ಬಹಳ ಗೌರವ ಮತ್ತು ಪ್ರಭಾವ ಹೊಂದಿದ್ದರೂ ಆಪ್ತರು, ನಿಕಟವರ್ತಿಗಳನ್ನು ಹೊಂದಿರಲಿಲ್ಲ. ಇವನು ಬರೆದದ್ದು ಕಡಿಮೆ ಆದರೆ ಇವನ ಪ್ರಭಾವಶಾಲಿ ಉಪನ್ಯಾಸಗಳನ್ನು ಹೆಲೆನ್ ಪೆರ್ರಿ ಅವನ ಮರಣಾನಂತರ ಸಂಗ್ರಹಿಸಿ ಪ್ರಕಟಿಸಿದಳು. 1949 ರಲ್ಲಿ ಪ್ಯಾರಿಸ್‌ನಲ್ಲಿ ವಿಶ್ವ ಮಾನಸಿಕ ಆರೋಗ್ಯ ಒಕ್ಕೂಟದ ಸಭೆಯಲ್ಲಿ ಭಾಗವಹಿಸಲು ಹೋಗಿದ್ದಾಗ ಹೋಟೆಲೊಂದರಲ್ಲಿ ಹೃದಯಾಘಾತದಿಂದ ಸಲ್ಲಿವಾನ್ ಮರಣ ಹೊಂದಿದ.

***